ಡಾ|| ಎಚ್. ಆರ್. ರಘುನಾಥ ಭಟ್

# ಮೈಸೂರು ಬಳಿ ವರುಣದಲ್ಲಿ ಮತ್ತೊಂದು ಜೈನಶಾಸನ ಸ್ತಂಭದ ಶೋಧನೆ

ಕರ್ನಾಟಕ ಶಾಸನ ಸಮೀಕ್ಷೆಯಲ್ಲಿ ಜೈನಸ್ತಂಭ ಶಾಸನ ಹಾಗೂ ನಿಶದಿಗೆ ಶಾಸನಗಳಿಗೆ ಪ್ರತ್ಯೇಕ ಸ್ಥಾನವಿದೆ. ಶಾಸನ ಸ್ವರೂಪ, ಪಾಠ ಮತ್ತು ಇತರ ವಿವರಗಳನ್ನು ಪರಿಶೀಲಿಸಿದರೆ ಈ ಮಾತು ಹೌದೆನ್ನಿಸೀತು. ಮೈಸೂರು ಬಳಿ ವರುಣಗ್ರಾಮದಲ್ಲಿ ಈಚೆಗೆ ನಾನು ಕೈಕೊಂಡ ಕ್ಷೇತ್ರ ಕಾರ್ಯದಲ್ಲಿ ಪತ್ತೆಯಾದ ಜೈನಸ್ತಂಭಶಾಸನವನ್ನು ಕುರಿತು ಒಂದು ಟಿಪ್ಪಣಿಯನ್ನಿಲ್ಲಿ ಬರೆಯಲಾಗಿದೆ.[1]

ವರುಣಗ್ರಾಮದ ಹೊರವಲಯದಲ್ಲಿ, ದೇವಾಂಬುದಿ ಕೆರೆಯಂಚಿನ ಬಯಲಲ್ಲಿ ಇರುವ ಹುಂಡಿಮಾರಮ್ಮ ಗುಡಿಯೆದುರಿಗೆ ನಿಲ್ಲಿಸಿರುವ ಕಲ್ಲುಕಂಬದ ಮೇಲೆ ಈ ಶಾಸನವನ್ನು ಕಂಡರಿಸಲಾಗಿದೆ.[2] ಕಣಶಿಲೆಯ ಕಂಬದ (೧೩೦ × ೨೨ × ೧೮ ಸೆಂ. ಮೀ.) ಎರಡು ಮೈಗಳಲ್ಲಿ ಮಾತ್ರ ಮೇಲಿಂದ ಕೆಳಕ್ಕೆ ಶಾಸನ ಬರಹವನ್ನು ಕೆತ್ತಲಾಗಿದೆ. ಕಂಬದ ಎದುರು ಮುಖದಲ್ಲಿ ಹದಿನೈದು ಸಾಲುಗಳೂ (೧-೧೫), ಹಿಮ್ಮುಖದಲ್ಲಿ ಹದಿನೆಂಟು ಸಾಲುಗಳೂ (೧೬-೩೩) ಕಂಡುಬರುತ್ತವೆ. ಈ ಕಂಬದ ಮೇಲ್ತುದಿಯಲ್ಲಿ ನಾಲ್ಕು ದಳಗಳ ಕಮಲವನ್ನು ಕವುಚಿಟ್ಟಂತೆ ಕೆತ್ತಲಾಗಿದೆ. ವರುಣದಲ್ಲಿರುವ ಉಳಿದ ಜೈನಶಾಸನ ಸ್ತಂಭಗಳಲ್ಲಿ ಕಂಡುಬರುವಂತೆ ಜಿನಬಿಂಬಗಳು ಗೂಡಿನೊಳಗಿದ್ದಂತೆ ಇಲ್ಲಿ ಶಿಲ್ಪಿತವಾಗಿಲ್ಲ.[3]

ಸುಮಾರು ಹತ್ತನೆಯ ಶತಮಾನದ ಹಳಗನ್ನಡ ಲಿಪಿ ಮತ್ತು ಭಾಷೆಯಲ್ಲಿ ಬರೆದ ಈ ಶಾಸನವು ಗದ್ಯಶೈಲಿಯಲ್ಲಿದೆ. ಅಲ್ಲಲ್ಲಿ ಕಾಗುಣಿತ ದೋಷಗಳೂ ನುಸುಳಿವೆ. ತೇದಿಯ ವಿವರಗಳು ಇಲ್ಲಿಲ್ಲ. ಇದರ ಲಿಪಿಶೈಲಿ, ಶಾಸನ ಪಾಠ ವಿವರಗಳನ್ನಾಧರಿಸಿ ಸುಮಾರು ಹತ್ತನೆಯ ಶತಮಾನದ್ದೆಂದು ಹೇಳಲಡ್ಡಿಯಿಲ್ಲ. ಇದು ಜೈನಸ್ಮಾರಕ ಸ್ತಂಭಶಾಸನ. ಇದನ್ನು ನಿಶದಿಗೆ ಸ್ತಂಭಶಾಸನ ಪ್ರಕಾರವೆಂದೂ ಪರಿಗಣಿಸಬಹುದು. ವರುಣ, ಶ್ರವಣಬೆಳಗೊಳ ಮುಂತಾದೆಡೆಗಳಲ್ಲಿ ಈ ಬಗೆಯ ಸ್ತಂಭಶಾಸನಗಳು ಸಾಕಷ್ಟಿವೆ.

### ಐತಿಹಾಸಿಕ ಮಹತ್ವ

ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಬಹುಕಾಲ ಆಳಿದ ಗಂಗರ ಕಾಲದ, ಗಂಗ ಕುಲದ, ಜೈನ

1. ವರುಣಗ್ರಾಮದ ವಾಸ್ತುಶಿಲ್ಪ, ಶಾಸನಗಳನ್ನು ಕುರಿತು, ವ್ಯಾಪಕ ಅಧ್ಯಯನ ಕೈಕೊಂಡಿದ್ದು ಒಂದು ಪುಸ್ತಕ ರೂಪದಲ್ಲಿ ಪ್ರಕಟವಾಗಲಿದೆ.

2. ನೋಡಿ : ಜೈ.ಇ.ಎಸ್.ಐ., ಸಂ. XI (೧೯೮೫)

3. ಮತ್ತೊಂದು ಜಿನ ಬಿಂಬವನ್ನೊಳಗೊಂಡ ನಿಶದಿಗೆ ಸ್ತಂಭಶಾಸನವೊಂದನ್ನು ಕೆಲವರ್ಷಗಳ ಹಿಂದೆ ಪತ್ತೆ ಮಾಡಿದ್ದು, ಅದರ ಬಗೆಗೆ ದಕ್ಷಿಣ ಭಾರತೀಯ ಇತಿಹಾಸ ಸಮ್ಮೇಳನದ ವಾರ್ಷಿಕ ಪ್ರಕಟಣೆ(೧೯೮೨)ಯಲ್ಲಿ ಓದಬಹುದು.

ಕಂತಿಯಾದ ಗಂಗಬ್ಬೆಯ ಒಂದು ಸ್ಮಾರಕವಾಗಿ ಈ ಸ್ತಂಭ ಶಾಸನ ಉಳಿದಿದೆ. ಗಂಗರು ಗುಣನಂದಿಯಂಥ ಜೈನ ಯತಿಗಳಿಂದ ಸ್ಫೂರ್ತಿ ಪಡೆದು ಜೈನಮತಕ್ಕೆ ವಿಶೇಷವಾಗಿ ಪ್ರೋತ್ಸಾಹ ನೀಡಿದ್ದು ನಾಡಿನ ಇತಿಹಾಸದಲ್ಲಿ ಆಗಲೇ ದಾಖಲೆಯಾಗಿದೆ. ಗಂಗಕುಲದಲ್ಲಿ ಗಂಗಬ್ಬೆಯಂಥ ಜೈನ ಕಂತಿಯರಿದ್ದರೆಂದು ಬಹುಶಃ ಮೊದಲ ಬಾರಿಗೆ, ಪ್ರಸ್ತುತ ಶಾಸನವು ಪ್ರಕಟಪಡಿಸುತ್ತದೆ. ಅಲ್ಲದೆ ಆ ಕಾಲದ ಖ್ಯಾತ ಜೈನ ಯತಿಯಾಗಿದ್ದ ಕುಮಾರಣಂದಿಯನ್ನು ಕುರಿತಂತೆ ಇದೊಂದು ಪ್ರಮುಖ ಶಾಸನವಾಗಿದೆ.

**ಸಮಾಜೋ ಧಾರ್ಮಿಕ ಮಹತ್ವ**

ಈ ಶಾಸನದ ಮೂಲ ಉದ್ದೇಶವೇ ಕಂತಿ ಗಂಗಬ್ಬೆಯ ಬಗೆಗೆ, ಅವಳು ಸಲ್ಲೇಖನವ್ರತವನ್ನಾಚರಿಸಿ ದೇಹಾಂತಗೊಂಡಿದ್ದರ ಬಗೆಗೆ ವಿವರಗಳನ್ನು ನೀಡುವುದಾಗಿದೆ. ಈ ಹಿನ್ನೆಲೆಯಲ್ಲಿ ಅವಳನ್ನು 'ಗಂಗಕುಲೋದ್ಭವೆ'ಯೆಂದೂ ಮಲದ ಕುಮಾರಣಂದಿಯ ಶಿಷ್ಯೆಯೆಂದು ಖ್ಯಾತಳಾಗಿದ್ದ ಬಾದುಬ್ಬೆಯಿಂದ ದೀಕ್ಷೆ ಪಡೆದವಳೆಂದೂ ಬಣ್ಣಿಸಲಾಗಿದೆ. ಈ ಬಾದುಬ್ಬೆ ಹಿರಿಯ ಸನ್ಯಾಸಿಣಿ (ಕಂತಿ)ಯಾಗಿರುವುದರಿಂದ ಅವಳನ್ನು 'ಆರ್ಯೆ' ಅಜ್ಜಿಯೆಂದೂ ಉಲ್ಲೇಖಿಸಲಾಗಿದೆ.

ಗಂಗಬ್ಬೆಯು 'ತುಂಗಾನ್ವಯ' ಮತ್ತು 'ಸೂರಸ್ತಗಣ'ಕ್ಕೆ ಸೇರಿದವಳು. ಅವಳನ್ನು 'ಸೂರಸ್ತಗಣಗುಣಾಗ್ರಣಿ' ಎಂದೇ ಪ್ರಶಂಸಿಸಲಾಗಿದೆ! ಇಂಥ ಖ್ಯಾತ ಕಂತಿ ಗಂಗಬ್ಬೆಯು ಸನ್ಯಸನ ವಿಧಿಯನ್ನು ಆಚರಿಸುತ್ತ ಪಂಚ ಪರಮೇಷ್ಠಿಧ್ಯಾನ ಮಾಡುತ್ತ (ಅಯ್ದನೊಂತು), ತನ್ನ ದೇಹತ್ಯಾಗ ಮಾಡಿ (ಸುಪರ್ಯಸನಗೆಯ್ದು) ಊರ್ಧ್ವ ಲೋಕ ಪಡೆದಳು (ಸ್ವರ್ಗಸ್ಥಳಾದಳು). ಇದನ್ನು ತಿಳಿಸುವ ಮರಣ-ಶಾಸನ ವರುಣದಲ್ಲಿ ಪತ್ತೆಯಾದ್ದರಿಂದ ಅವಳು ಆ ಊರಲ್ಲೇ ಸತ್ತಿರಬೇಕೆಂದು ಊಹಿಸಲು ಅವಕಾಶವಿದೆ. ಆದರೆ ಆ ನಿರ್ದಿಷ್ಟ ಸ್ಥಳವನ್ನು ನಿರ್ದೇಶಿಸಲು ಆಗದು. ಸ್ಮಾರಕ ಕಂಬ ಇರುವುದು ಈಗಿನ ಗ್ರಾಮದೇವತೆ ಹುಂಡಿಮಾರಮ್ಮ ಗುಡಿಯೆದುರಲ್ಲಿ. ಇದು ಸ್ಥಳಾಂತರಗೊಂಡಿರುವ ಸಂಭವವಿಲ್ಲದಿಲ್ಲ.

ಇದು ಗಂಗರ ಕಾಲದಲ್ಲಿ ಖ್ಯಾತನಾಮನಾಗಿದ್ದ ಕುಮಾರಣಂದಿಯ ವ್ಯಕ್ತಿತ್ವದ ಮೇಲೆ ಹೊಸ ಬೆಳಕನ್ನು ಚೆಲ್ಲುವಂಥದ್ದಾಗಿದೆ. ಇವನನ್ನು ಮಲದ ಕುಮಾರಣಂದಿಯೆಂದು ಉಲ್ಲೇಖಿಸಲಾಗಿದೆ. ಮಲದ/ಮಲಧಾರಿ ಎಂಬುದು ಜೈನಯತಿಪ್ರಕಾರವನ್ನು ಸೂಚಿಸುತ್ತದೆ. ಇವನನ್ನು 'ಮುನೀಂದ್ರ' (ಮುನಿಸಮೂಹದಲ್ಲೀ ಇಂದ್ರನಂತಿರುವವನು), 'ನಿಯಮಾದಿಗುಣೋಪೇತರು', ಕೊಂಡಕುಂದಾನ್ವಯದ ಶ್ರೀಮತ್ ಕುಮಾರಣಂದಿ ಭಟ್ಟಾರಕರೆಂದು ಸ್ತುತಿಸಲಾಗಿದೆ. ಇವರು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳಲ್ಲೆಲ್ಲ ಸಂಚರಿಸುತ್ತಿದ್ದಿರಬೇಕೆಂಬುದು ಹತ್ತನೆಯ ಶತಮಾನದ ಬೇಗೂರು ಶಾಸನ ಸೂಚಿಸುತ್ತದೆ.[4] ಗಂಗ ಶ್ರೀಪುರುಷನ ದೇವರಹಳ್ಳಿ ತಾಮ್ರಶಾಸನವೂ(ಎಂಟನೆಯ ಶತಮಾನ) ಒಬ್ಬ ಕುಮಾರಣಂದಿಯನ್ನು ಬಹುವಾಗಿ ಸ್ತುತಿಸುತ್ತದೆ.[5] ಈತನೇ ವರುಣಶಾಸನೋಕ್ತ ಕುಮಾರಣಂದಿಯೆಂದು ತೀರ್ಮಾನಿಸಲು ಕಾಲದ ಅಂತರ (ಸುಮಾರು ಎರಡು ಶತಮಾನಗಳು!) ಅಡ್ಡಿ ಬರುತ್ತದೆ. ಅಂತೆಯೇ ಇವರು ಬೇರೆ ಬೇರೆ ಯತಿಗಳಾಗಿರಬಹುದೆಂದು ಭಾವಿಸಬಹುದು.

ಇನ್ನೋರ್ವ ಹಿರಿಯ ಜೈನ ಸಂನ್ಯಾಸಿಣಿಯಾದ ಬಾದುಬ್ಬೆ ಬಗೆಗೆ ಇನ್ನೂ ಹೆಚ್ಚಿನ ವಿವರಗಳು ಪ್ರಸ್ತುತ ಶಾಸನದಲ್ಲಿಲ್ಲ. ಗಂಗಬ್ಬೆಗೆ ದೀಕ್ಷೆ ಕೊಟ್ಟ ಈಕೆ ಬಹುಶಃ ಮೊದಲಬಾರಿಗೆ ವರುಣಸ್ತಂಭಶಾಸನದಲ್ಲಿ ಉಲ್ಲೇಖಿತಳಾಗಿದ್ದಾಳೆ.

ಜೈನ ನಿಶದಿಗೆ ಕಂಬದ ಮೇಲಣ ಬರಹದಲ್ಲಿ ಜಿನ ಶಾಸನ, ಮಲದ (ಮಲಧಾರಿ), ಅನ್ವಯ, ಗಣ,

---

4. ಎಕ IX, ಬೇಗೂರು-೯೫ (ಸು. ೯೫೦)
5. ನೋಡಿ : ಕೆ.ವಿ. ರಮೇಶ್ : ಇನ್‌ಸ್ಕ್ರಿಪ್ಶನ್ಸ್ ಆಫ್ ವೆಸ್ಟರ್ನ್ ಗಂಗಾಸ್, ದೆಹಲಿ, ೧೯೮೪ : ಎಕ IV, ದೇವರಹಳ್ಳಿ-೮೫ (೭೭೬–೭೭)

ಉಭಯ ಸಂಘ, ಸನ್ಯಸನವಿಧಿ, ಅಯ್ದುನೊಂತು (ನೊಂಪಿ), ಸ್ವರ್ಗ, ಕಂತಿ ಮುಂತಾದ ಪಾರಿಭಾಷಿಕ ಪದಗಳಿವೆ. ಇವೆಲ್ಲ ಜನಜನಿತ ಶಬ್ದಗಳಾಗಿದ್ದು, ಪ್ರತ್ಯೇಕ ವಿವರಗಳಿಗೇನೂ ಇಲ್ಲಿ ಅವಕಾಶ ನೀಡಲಾರವು.[6]

ಪ್ರಸ್ತುತ ಶಾಸನ ಶೋಧನೆಯಿಂದ ವರುಣವು ಹತ್ತನೆಯ ಶತಮಾನದಲ್ಲಿ ಜೈನ ಕೇಂದ್ರವಾಗಿತ್ತೆಂಬುದು ಇನ್ನೂ ಸ್ಪಷ್ಟವಾಗುತ್ತದೆ. ಅಲ್ಲಿರುವ ಜಿನಬಿಂಬಗಳೂ ಜೈನ ಶಾಸನಗಳೂ ಜೈನ ಬಸದಿಯ ಅವಶೇಷಗಳೊ ಇದಕ್ಕೆ ಮೂಕಸಾಕ್ಷಿಗಳಾಗಿ ಅಲ್ಲಲ್ಲಿ ಚದುರಿವೆ. ಕರ್ನಾಟಕದ ಜೈನ ಕಂತಿಯರ ಪಟ್ಟಿಗೆ ಇನ್ನೊಂದು ಹೆಸರು ವರುಣದ ಗಂಗಬ್ಬೆ ಶಾಸನದ ಶೋಧನೆಯಿಂದ ಸೇರಿ ದಂತಾಯಿತು. ಅಲ್ಲದೆ ಇದು ಜೈನ ನಿಶದಿಗೆಸ್ತಂಭಶಾಸನಗಳ ಸಾಲಲ್ಲಿ ನಿಲ್ಲಿಸಬಹುದಾದ ಒಂದು ಹೊಸ ಸೇರ್ಪಡೆ ಯೆಂದೂ ಹೇಳಬಹುದು.

---

6. ನೋಡಿ : ತ.ಸು. ಶಾಮರಾಯ, ಪ. ನಾಗರಾಜಯ್ಯ : ಜೈನ ಪರಿಭಾಷಾಕೋಶ, ಬೆಂಗಳೂರು, ೧೯೮೧